# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮರಿತಿಬ್ಬೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1324

ಉತ್ತರಿಸಬೇಕಾದ ದಿನಾಂಕ : 08–03–2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರೈತರಿಗೆ ಸಹಕಾರ ಸಂಘಗಳ ಮೂಲಕ ಗರಿಷ್ಠ ರೂ.3.00 ಲಕ್ಷಗಳ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಸಾಲವನ್ನು ನೀಡಲಾಗುತ್ತಿದೆಯೇ; | ಹೌದು, ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು, ಲ್ಯಾಂಪ್ಸ್ ಸಹಕಾರ ಸಂಘಗಳು, ಪಿಕಾರ್ಡ್ ಬ್ಯಾಂಕುಗಳ ಮೂಲಕ ರಾಜ್ಯದ ರೈತರಿಗೆ ರೂ.3.00 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲವನ್ನು ಹಾಗೂ ರೂ.2.00 ಲಕ್ಷಗಳವರೆಗೆ ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳ ಸಾಲವನ್ನು ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ನೀಡಲಾಗುತ್ತಿದೆ. ಅಲ್ಪಾವಧಿ ಕೃಷಿ ಸಾಲ ಮತ್ತು ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳ ಸಾಲ ಸೇರಿ ಒಟ್ಟು ರೂ.3.00 ಲಕ್ಷಗಳನ್ನು ಮೀರತಕ್ಕದ್ದಲ್ಲ. |
| ಆ) | ಯಾವ ದಿನಾಂಕದಿಂದ ಇದು ಜಾರಿಯಲ್ಲಿದೆ; | ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ರೂ.3.00 ಲಕ್ಷಗಳವರೆಗೆ ಅಲ್ಪಾವಧಿ ಕೃಷಿ ಸಾಲ ನೀಡುವ ಯೋಜನೆಯನ್ನು ದಿ:01–04–2014 ರಿಂದ ಮತ್ತು ರೂ.2.00 ಲಕ್ಷಗಳವರೆಗೆ ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳ ಸಾಲ ನೀಡುವ ಯೋಜನೆಯನ್ನು ದಿ:01–04–2020 ರಿಂದ ಜಾರಿಯಲ್ಲಿರುತ್ತದೆ. |
| ಇ) | ಸದರಿ ಸಾಲದ ಬಾಬ್ತು ಸಹಕಾರ ಸಂಘಗಳಿಗೆ ಸರ್ಕಾರ ಪಾವತಿಸಬೇಕಾಗಿರುವ ಬಾಕಿ ಬಡ್ಡಿಯ ಮೊತ್ತವೆಷ್ಟು; | ಈ ಯೋಜನೆಯಲ್ಲಿ ದಿ:12–01–2022 ರವರೆಗೆ ಸಹಕಾರ ಸಂಘಗಳ ಮೂಲಕ ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ಸ್ವೀಕರಿಸಿದ ಬಿಲ್ಲುಗಳಿಗೆ ರೂ.217.55 ಕೋಟಿಗಳ ಬಡ್ಡಿ ಸಹಾಯಧನ ಬಿಡುಗಡೆ ಮಾಡಲು ಬಾಕಿ ಇರುತ್ತದೆ. |
| ಈ) | ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಸಾಲದ ಮೊತ್ತವನ್ನು ಗರಿಷ್ಠ ರೂ.5.00 ಲಕ್ಷದವರೆಗೆ ಹೆಚ್ಚಿಸಲು ಸರ್ಕಾರ ಚಿಂತಿಸುವುದೇ; | ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಸಾಲದ ಮೊತ್ತವನ್ನು ರೂ.3.00 ಲಕ್ಷದಿಂದ ಗರಿಷ್ಠ ರೂ.5.00 ಲಕ್ಷದವರೆಗೆ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

| | | |
|---|---|---|
| ಉ) | ಸಾಲ ಮರುಪಾವತಿ ಸಂದರ್ಭದಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು, ಪ್ಯಾಕ್ಸ್ ಸಹಕಾರ ಸಂಘಗಳಿಂದ ಒತ್ತಾಯ ಪೂರ್ವಕವಾಗಿ ಬಡ್ಡಿಯನ್ನು ಪಾವತಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷಿ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಪ್ಯಾಕ್ಸ್‌ಗಳಿಂದ ರೈತರು ಪಾವತಿಸಿದ ಅಸಲನ್ನು ಮಾತ್ರ ಜಮಾ ತೆಗೆದುಕೊಂಡು, ಯಾವುದೇ ಬಡ್ಡಿಯನ್ನು ವಸೂಲು ಮಾಡದೇ ಸರ್ಕಾರದಿಂದ ಬಿಡುಗಡೆಯಾಗುವ ಬಡ್ಡಿ ಸಹಾಯಧನವನ್ನು ಮಾತ್ರ ಜಮಾ ಪಡೆಯಲು ದಿ:04.08.2021 ರಂದು ಎಲ್ಲಾ ಡಿಸಿಸಿ ಬ್ಯಾಂಕುಗಳಿಗೆ ತಿಳಿಸಿದ್ದು, ಯಾವುದೇ ಡಿಸಿಸಿ ಬ್ಯಾಂಕುಗಳು ಚಾಲ್ತಿ ಅಲ್ಪಾವಧಿ ಕೃಷಿ ಸಾಲಗಳಿಗೆ ಪ್ಯಾಕ್ಸ್‌ಗಳಿಂದ ಬಡ್ಡಿಯನ್ನು ವಸೂಲು ಮಾಡುತ್ತಿರುವುದು ವರದಿಯಾಗಿರುವುದಿಲ್ಲ. |
| ಊ) | ಇದರಿಂದ ಪ್ಯಾಕ್ಸ್ ಸಹಕಾರ ಸಂಘಗಳು ನಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಡ್ಡಿ ವಸೂಲು ಮಾಡದೇ ಇರುವುದರಿಂದ ಪ್ಯಾಕ್ಸ್‌ಗಳು ನಷ್ಟ ಅನುಭವಿಸುವ ಸಂಭವ ಉದ್ಭವಿಸುವುದಿಲ್ಲ. |

**ಸಂಖ್ಯೆ : ಸಿಒ 87 ಸಿಎಲ್‌ಎಸ್ 2022**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು